ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಅರಣ್ಯ ಇಲಾಖೆಯಲ್ಲಿನ ಜೇಷ್ಠತಾ ಪಟ್ಟಿ ನ್ಯೂನತೆ ಕುರಿತು

ಡಾ|| ತೇಜಸ್ವಿನಿಗೌಡ (ವಿಧಾನಸಭೆಯಿಂದ ಚುನಾಯಿತರಾದವರು) :-

900 (1282) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಅರಣ್ಯ ಇಲಾಖೆಯ ವಿವಿಧ ವೃಂದದ ಜೇಷ್ಠತಾ ಪಟ್ಟಿಯಲ್ಲಿರುವ ನ್ಯೂನತೆಯನ್ನು ಸರಿಪಡಿಸಲು ಸರ್ಕಾರ ರಚಿಸಿದ ಸಮಿತಿಯ ವರದಿಯನ್ನು ಸರ್ಕಾರ ಸಂಪೂರ್ಣವಾಗಿ ಒಪ್ಪಿದ ನಂತರ ಸಮಿತಿಯ ವರದಿಯನ್ನು ಯಥಾವತ್ತಾಗಿ ಅನುಷ್ಠಾನಗೊಳಿಸುವಂತೆ ಸಕ್ಷಮ ಪ್ರಾಧಿಕಾರಕ್ಕೆ ಹಾಗೂ ಇಲಾಖಾ ಮುಖ್ಯಸ್ಥರಿಗೆ ಸೂಚನೆ ನೀಡಿದ್ದು ಅದರಂತೆ ಜೇಷ್ಠತಾ ಪಟ್ಟಿಯಲ್ಲಿರುವ ನ್ಯೂನತೆಯನ್ನು ಸರಿಪಡಿಸಲಾಗಿದೆಯೇ ;

(ಆ) ಸಮಿತಿಯ ವರದಿಯನ್ನು ಅನುಷ್ಠಾನಗೊಳಿಸದೇ ಕೆನರಾ, ಮೈಸೂರು, ಬೆಂಗಳೂರು, ಕೊಡಗು, ಚಿಕ್ಕಮಗಳೂರು, ಧಾರವಾಡ ವೃತ್ತದ ಸಕ್ಷಮ ಪ್ರಾಧಿಕಾರವು ಉಪವಲಯ ಅರಣ್ಯ ಅಧಿಕಾರಿ ವೃಂದದಲ್ಲಿ ಈ ಹಿಂದೆ ಮಾಡಿರುವ ನ್ಯೂನತೆಗಳನ್ನು ನಿಯಮಬಾಹಿರವಾದ ಮತ್ತು ಬೇಜವಾಬ್ದಾರಿ ಕಾರಣಗಳನ್ನು ನಮೂದಿಸಿ ಸಮರ್ಥಿಸಿಕೊಂಡಿರುವುದು ಸರ್ಕಾರ ಮತ್ತು ಇಲಾಖಾ ಮುಖ್ಯಸ್ಥರ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಕೈಗೊಂಡ ಕ್ರಮಗಳೇನು; ಈ ರೀತಿ ತಪ್ಪುಗಳನ್ನು ಪುನರಾವರ್ತಿಸುತ್ತಿರುವ ಅಧಿಕಾರಿಗಳ ಮೇಲೆ ಕಾನೂನು ಕ್ರಮ ಜರುಗಿಸಲು ಸರ್ಕಾರ ಕೂಡಲೇ ಕ್ರಮಕೈಗೊಳ್ಳುವುದೇ ;

(ಇ) ಇದುವರೆವಿಗೆ ತಪ್ಪಿತಸ್ಥ ಅಧಿಕಾರಿಗಳ ಮೇಲೆ ಕ್ರಮವಾಗದಿದ್ದರೆ, ವಿಳಂಬಕ್ಕೆ ಕಾರಣವೇನು ; ಯಾವ ಕಾಲಮಿತಿಯೊಳಗೆ ಕ್ರಮವಹಿಸಲಾಗುವುದು?